ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಸರ್ವೇ ಕಾರ್ಯ ಸಮರ್ಪಕವಾಗಿ ನಡೆಸುವ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ):-

205 (246) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರೈತರು ತಮ್ಮ ಜಮೀನುಗಳ ಸರ್ವೆ ಕಾರ್ಯಕ್ಕೆ ಶುಲ್ಕ ಪಾವತಿಸಿ, ಸಲ್ಲಿಸಲಾಗಿರುವ ಅರ್ಜಿಗಳ ಒಟ್ಟು ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಆ) ಶುಲ್ಕ ಪಾವತಿಸಿ, ಅರ್ಜಿ ಸಲ್ಲಿಸಿದ ಸರ್ವೇ ಕಾರ್ಯವನ್ನು ಪೂರ್ಣಗೊಳಿಸಲು ಇಲಾಖೆಯಲ್ಲಿನ ಮಾರ್ಗಸೂಚಿಗಳೇನು; (ವಿವರ ನೀಡುವುದು)

(ಇ) ಸರ್ವೇ ಕಾರ್ಯ ವಿಳಂಬದಿಂದಾಗಿ ರೈತರು ತೊಂದರೆಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ;

(ಈ) ಹಾಗಿದ್ದಲ್ಲಿ, ವಿಳಂಬ ತಪ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳೇನು;

(ಉ) ರಾಜ್ಯದಲ್ಲಿ ಭೂಮಾಪಕರ ಕೊರತೆ ಇದೆಯೇ; ಕೊರತೆ ನೀಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು?